ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಕಾರ್ಯ ವೈಕರಿಯ ಬಗ್ಗೆ

ಶ್ರೀ ಬಿ. ಕೆ. ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು):-

921(1059) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಕಳೆದ ಎರಡು ವರ್ಷಗಳಲ್ಲಿ ಎಷ್ಟು ಕೈಗಾರಿಕಾ ನಿವೇಶನಗಳನ್ನು ಅಭಿವೃದ್ಧಿಪಡಿಸಿ ಹಂಚಿಕೆ ಮಾಡಿರುತ್ತದೆ; (ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಮಂಡಳಿಯ ಮುಖಾಂತರ ರಾಜ್ಯ ಉನ್ನತ ಮಟ್ಟದ ತೀರುವಳಿ ಸಮಿತಿಗೆ ಕಳೆದ ಎರಡು ವರ್ಷಗಳಲ್ಲಿ ಕೈಗಾರಿಕಾ ನಿವೇಶನಗಳನ್ನು ಕೋರಿ ಎಷ್ಟು ಅರ್ಜಿ ಸಲ್ಲಿಕೆ ಆಗಿರುತ್ತದೆ; ಸಲ್ಲಿಕೆಯಾದ ಅರ್ಜಿಗಳಲ್ಲಿ ಎಷ್ಟು ಮಂದಿಗೆ ಕೈಗಾರಿಕಾ ನಿವೇಶನಗಳನ್ನು ನೀಡಲಾಗಿದೆ; ಇವುಗಳಲ್ಲಿ ಒಂದೇ ಸಂಸ್ಥೆ ಅಥವಾ ಕಂಪನಿಗೆ ಒಂದಕ್ಕಿಂತ ಹೆಚ್ಚು ಕೈಗಾರಿಕಾ ನಿವೇಶನಗಳು ಮಂಜೂರಾಗಿರುವ ಪ್ರಕರಣಗಳು ಎಷ್ಟು;

(ಇ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಭೂ ಅಧಿಸೂಚನೆಯನು ಹಿಂಪಡೆಯುವಿಕೆಯ ಮೂಲಕ ಕಳೆದ ಎರಡು ವರ್ಷಗಳಲ್ಲಿ ಎಷ್ಟು ಎಕರೆ ಪ್ರದೇಶವನ್ನು ಭೂ ಮಾಲೀಕರಿಗೆ ಹಿಂದಕ್ಕೆ ನೀಡಲಾಗಿದೆ; ಅಧಿಸೂಚನೆಯನ್ನು ಹಿಂಪಡೆದ ಪ್ರಕರಣಗಳಲ್ಲಿ ಭೂ ಮಾಲೀಕರಿಗೆ ಪಾವತಿಯಾಗಿರುವ ಹಣವನ್ನು ವಾಪಸ್ಸು ಪಡೆಯಲಾಗಿದೆಯೇ; ಪಡೆಯದೇ ಇದ್ದಲ್ಲಿ, ಬಾಕಿಯಿರುವ ಹಣ ಎಷ್ಟು ?